# ವೀರಣ್ಣೊಡೆಯರ ಕಂದ

ಉಡುಗಡಣದೊಡೆಯ(ನುಡುಪಂ)
ಘುಡು ಘುಡಿಸುವ ಜಡವನಿತೆಯ ನಡುಜೆಡೆಯೆಡೆಯಂ
ಹಡಗಳೆಡೆವಿಡದ ಕಾಂತಿಯ
ಮೃಡನಡಿಯಂ ಕಂಡೆನನ್ನ ಕರಕಮಲದೊಳುಂ | ೧

ಕುಸುಮಶರಶಮನ ಪುರಮಂ
ಬಿಸಿಗಣ್ಣಿಂದೆಸೆದು ಪೊಸೆದಗಿದಸ(ಮ ಘನನಂ)
ಎಸೆವ ಪೊಸಭಸಿತ ನೊಸಲಿನ
ಅಸವಿಷರುಹ ಪದವ ಕಂಡೆ ಕರಕಮಲದೊಳುಂ || ೨

ವರ್ಣಾಕೀರ್ಣ ಪ್ರಪೂರ್ಣದ
ವರ್ಣಕ್ಕತಿಶಯದ ರತ್ನ(ದುರು) ಪನ್ನಗನಂ
ಕರ್ಣಿಸಿ ಕರದೊಳಿರಿಸಿರ್ದ-
ಪರ್ಣೆಯ(ರಸ)ನಡಿಯ ಕಂಡೆ ಕರಕಮಲದೊಳುಂ || ೩

ಕರ್ಬಿನ ಮೊರ್ಬಿನ ದುರ್ಬಿನ
ಸರ್ಬಿನ ನಿರ್ಬಿನ ಮೇಘದ ನೀಲದ ಮಿಗಿಲಂ
ಪೊರ್ಬಿನ ಕೊರ್ಬಿನ (ಪು)ರ್ಬಿನ
ಶ(ರ್ಬ)ನಭವನಡಿಯ ಕಂಡೆ ಕರಕಮಲದೊಳುಂ || ೪

ತಿಣ್ವೆಳಗಿನ ತಣ್ಗದಿರಿನ
ನುಣ್ವೆಳಗಿನ (ಊ)ಷ್ಣಗದಿರ ಬಿಣ್ವೆಳಗಿನಲಂ
ಕಣ್ವೆಳಗಿನೊಳುಣ್ಮಿದ ಘನ
ನುಣ್ವೆಳಗಿನ ಪದವ ಕಂಡೆ ಕರಕಮಲದೊಳುಂ || ೫

ಪೊಸ ಕುಸುಮವಸರದೆಸವಂ
ದೆಸೆ ದೆಸೆಯೊಳ್ಮುಸುಕಿ ಪಸರಿಸುವ ಪರಿಮಳದಾ
ರಸವಾಸವಸೆವ ನಾಸಿಕ-
ದಸಮನ ಲಸತಡಿಯ ಕಂಡೆ ಕರಕಮಲದೊಳುಂ || ೬

ಉದಯರವಿ ಪದುಮರಾಗದ
ವೊದವಿದ ನವಕಾಂತಿಯಧರ ಮೃದು ರಾಜಿಸುತಂ
ರದನವಿದು ದೀವಿ ಚೆಲುವಿನ
ಸದಮಲ ಪದಯುಗವ ಕಂಡೆ ಕರಕಮಲದೊಳುಂ || ೭

ವೇದ ಮೊದಲಾದ ಶಾಸ್ತ್ರದ-
ಲಾದಿಯ ಪೌರಾಣದಾಗಮ ರಹಸ್ಯಗಳಂ
ಬೋಧಿಸಿದ ನಾದಮೂರ್ತಿಯ
ಪಾದ ಸುಪದ್ಮವನು ಕಂಡೆ ಕರಕಮಲದೂಳುಂ || ೮

ತರಳಳಿಗಳಿರುಳ ತಿರುಳಿನ
ಹುರುಳಿಂ ಮಿಗೆ ಹೊಳೆವ ದುರುಳ ಗರಳದ ಬಳವಂ
ಕೊರಳಿನೊಳುಂ ಥಳಥಳಿಸುವ
ಅರಳಂಬುಜದಡಿಯ ಕಂಡೆ ಕರಕಮಲದೊಳುಂ || ೯

ನಳನಳಿಪ ನಳಿನ ಮಿರುಪಿನ
ಥಳಥಳಿಸಿಯೆ ಹೊಳೆವ ಪುಷ್ಪಮಾಲೆಗೆ ಮಿಗಿಲಂ-
ತೊಳ ತೊಳಪ ತೋಳ ಚಲುವಿನ
ಬೆಳಬೆಳಪಮಳಡಿಯ ಕಂಡೆ ಕರಕಮಲದೊಳುಂ || ೧೦

ಏಣಫಣಿಪಾಶಮಂಕುಶ
ಮಾಣದೆ ವರದಭಯ ವಜ್ರಮಗ್ನಿ ತ್ರಿಶೂಲಂ
ಕಾಣಿಸುವ ಘಂಟೆ ಸಹ ಸರ-
ಪಾಣಿಯ ಪದಯುಗವ ಕಂಡೆ ಕರಕಮಲದೂಳುಂ || ೧೧

ಸುರುಚಿರ ವರ ಲಾವಣ್ಯದ
ಸುರ ಶಿರಸರಮಾಲೆ ನರ ವಿರಾಜಿಸುತಿರ್ಪಾ
ಕರಿಮುಖ ಗುಹನಾ(ಲಿಂ)ಗಿಪ
ಸುರುಚಿರ ಪದಯುಗವ ಕಂಡೆ ಕರಕಮಲದೊಳುಂ || ೧೨

ನಳನಳಿಪ ನಳಿನ ಮಿರುಪಿನ
ಥಳಥಳಿಸುವನಮಳ ಕರ್ಣಿಕೆಯ ಕಾಂತಿಯೊಲುಂ
ಸುಳಿನಾಭಿ ಮಿಳಿರ್ವ ಸೊಬಗಿನ
ಹೊಳೆವತಿ ಪದತಳವ ಕಂಡೆ ಕರಕಮಲದೊಳುಂ || ೧೩

ಘಲಘಲನೆ ಉಲಿವ ಕಿಂಕಿಣಿ
ಸುಲಲಿತ ಸಲೆ ಕಾಂತಿಯೊಡನೆ ರಾಜಿಸುತಿರ್ಪಾ
ಚೆಲುವಿನ ಬಲು ಕ(ಟಿ)ಯೊಳಗಿನ
ಪುಲಿದೊವಲವನಡಿಯ ಕಂಡೆ ಕರಕಮಲದೂಳುಂ || ೧೪

ಎಳವಾಳೆಯ ನಳನಳಿಕೆಯ
ಥಳಥಳಿಸಿಯೆ ಹೊಳವನಮಳಕಾಂತಿಯ ಚೆಲುವಿಂ
ಚಳಿಗಿರಿಯ ಮಗಳು ಕುಳಿತಿಹ
ಒಳುದೊಡೆಯವನಡಿಯ ಕಂಡೆ ಕರಕಮಲದೊಳುಂ || ೧೫

ಪರಕೆ ಪರ ಪರಮ ಪರತರ
ಪರಮಾತ್ಮನ ಪರಮ ತತ್ವಮಯ ಪರಶಿವನಂ
ಕಿರುದೊಡೆಯ ಕಿರಣರಾಜಿಪ
ಸುರುಚಿರ ಪದಯುಗವ ಕಂಡೆ ಕರಕಮಲದೊಳುಂ || ೧೬

ಅಜ ಹರಿ ಸುರ ಮನುಮುನಿಗಳು
ಭಜಿಸುವ ಭಾವನೆಗೆ ನಿಲುಕದಜಡದ್ವಯನಂ
ಸುಜನ ಹೃದಂಬುಜ ವಾಸನ
ನಿಜ ಪದಯುಗದಡಿಯ ಕಂಡೆ ಕರಕಮಲದೊಳುಂ || ೧೭

ಕೋಟಿ ರವಿ ಶಶಿ ತಟತ್ಪ್ರಭೆ
ನೀಟೆನಿಸುವಲಯ ಕೃಪೀಟ ಜ್ವಾಲಾಮಯಮಂ
ಪಾಟಿಸಿದ ಪಾತ್ರನಂ ಪದ
ಪೀಠವ(ನೆರೆ) ಕಂಡೆನೆನ್ನ ಕರಕಮಲದೊಳುಂ || ೧೮

ಕಂಡು ಕಡು ಪುಳಕತತಿಯೆಡ-
ಗೊಂಡುಂ ಕೊಂಡಾಡಿ ತೊಂಡುಗಡವುತ ಪದಮಂ
ಮಂಡಳಿಪ ಕುಸಮ ತಂಡದ
ಯಿಂಡೆಗಳಿಂದಭವನಡಿಯನರ್ಚಿಸುತಿರ್ದೆಂ ||

ಅರವಿಂದ ಸುರಗಿ ಸಂಪಗೆ
ಸುರಹೊನ್ನೆಯು ಉರಗಸಂಪಗೆಯು ಕರವೀರಂ
ಇರವಂತಿ ವರ ಸುಗಂಧಿಯ
ಪರಿಪರಿ ದಂಡಗಳೊಳೊಲಿದು ಪೂಜಿಸುತಿರ್ದೆಂ || ೨೦

ಮೊಲ್ಲೆ ಮುಡಿವಾಳ ಮಾಲತಿ
ಕಲ್ಹಾರದ ಕನಕಜಾಲ ಪಾಲಾಸಗಳಿಂ
ಚೆಲ್ವೆಸೆದಿಹ ಚೆಂಗಣಿಗಿಲ
ಝಲ್ಲರಿಯಂ ಶಿವನಡಿಯನು ಪೂಜಿಸುತಿರ್ಪೆಂ || ೨೧

ಪಾದರಿಯು ಪಾರಿಜಾತದ
ಮಾಧವಿ ಮಾದಲ ಸೇವಂತಿಯು ಬಂದುಗೆಯುಂ
ಕೇದಗೆಯು ನಂದಿವರ್ತದ
ಮಾಧುರದ ವಲ್ಲರಿಗಳಿಂದ ಭಜಿಸುತಿರ್ಪೆಂ || ೨೨

ಮರುಗ ಮಾಂದಳಿರು ಪಚ್ಚೆಯು
ದೂರ್ವಾಂಕುರಶೋಕೆ ಬಿಲ್ವ ಮಂಚುತ್ತರಣಿಂ
ಪರಿಮಳಿಪ ದವನ ಮುಡಿವಳ
ದಿರವಿಂ ಪರಶಿವನ ಪದವನೊಲಿದರ್ಚಿಸುವೆಂ || ೨೩

ಕರಕೆ ಮೃದುವಾಗಿ ನಯನಕೆ
ವರ ಶೋಭನವಾದ ಪತ್ರ ಪುಷ್ಪಗಳಿಂದಂ
ಪರಿಮ(ಳದು)ದಕದ ಗಂಧದಿ
ಕರುಣಾಕರನಮಲ ಪದವನೊಲಿದರ್ಚಿಸುವೆಂ || ೨೪

ಇಂತುಮನಂತ ವಿಧದಿ ಗುರು
ಶಾಂತನ ಪದಯುಗವನಮಳ ಭಕ್ತಿಗಳಿಂದಂ
ಭ್ರಾಂತು ಭ್ರಮೆಯಳಿದು ಪೂಜಿ(ಸಿ)
ಸಂತತ ನಿಜಸುಖ ನಿವಾಸದೂಳಗೊಪ್ಪಿರ್ದೆಂ || ೨೫

ಕರಸ್ಥಲ ವೀರಷ್ಟೂಡೆಯರು ನಿರೂಪಿಸಿದ ಕಂದ ಸಮಾಪ್ತ ಮಂಗಳಮಹಾ

ಶ್ರೀಶ್ರೀಶ್ರೀ